


# INTERNATIONAL JOURNAL OF RESEARCH AND ANALYTICAL REVIEWS (IJRAR) | IJRAR.ORG

*An International Open Access, Peer-reviewed, Refereed Journal*

E-ISSN: 2348-1269, P-ISSN: 2349-5138


Certificate of Publication

The Board of

International Journal of Research and Analytical Reviews (IJRAR)

Is hereby awarding this certificate to

**Dr. SIDDAIAH R.S**

In recognition of the publication of the paper entitled

**Jagatthinalli Kayaka Thathvada Hirime**

Published In IJRAR ( www.ijrar.org ) UGC Approved - Journal No : 43602 & 7.17 Impact Factor

Volume 11 Issue 1 March 2024, Date of Publication: 10-March-2024

PAPER ID : IJRAR24A2769

**Registration ID : 284296**




R.B.Joshi

**EDITOR IN CHIEF**

IJRAR | E-ISSN: 2348-1269, P-ISSN: 2349-5138

IJRAR.ORG E-ISSN: 2348-1269, P-ISSN: 2349-5138



INTERNATIONAL JOURNAL OF RESEARCH AND ANALYTICAL REVIEWS (IJRAR) | IJRAR.ORG

An International Open Access, Peer-reviewed, Refereed Journal

# ಜಗತ್ತಿನಲ್ಲಿ ಕಾಯಕ ತತ್ವದ ಹಿರಿಮೆ

ಡಾ. ಸಿದ್ದಯ್ಯ ಆರ್.ಎಸ್.
ಕನ್ನಡ ಅತಿಥಿ ಉಪನ್ಯಾಸಕರು
ವಿಶ್ವವಿದ್ಯಾಲಯ ಕಾನೂನು ಕಾಲೇಜು
ಬೆಂಗಳೂರು ವಿಶ್ವವಿದ್ಯಾಲಯ
ಬೆಂಗಳೂರು–560056

'ವಚನ' ಕನ್ನಡಿಗರಿಂದಲೇ ಸೃಷ್ಟಿಯಾದ ವಿಶಿಷ್ಟವಾದ ಒಂದು ಸಾಹಿತ್ಯ ಪ್ರಕಾರ. ಸಂಸ್ಕೃತವು ದೇವ ಭಾಷೆಯಾಗಿ ಉನ್ನತ ಸ್ಥಾನಮಾನಗಳನ್ನು ಪಡೆದು ಮೆರೆಯುತ್ತಿದ್ದಂತಹ ಸಂದರ್ಭದಲ್ಲಿ ಕನ್ನಡಿಗರು ಕನ್ನಡದಲ್ಲೇ ತಮ್ಮ ಅನುಭವಗಳನ್ನು ಹಂಚಿಕೊಂಡು ಅನುಭಾವದ ನೆಲೆಗೆ ಅದನ್ನು ತೆಗೆದುಕೊಂಡು ಹೋದರು. ಅಲ್ಲದೆ ವಿಶ್ವದ ಸಾಹಿತ್ಯ ಮತ್ತು ಸಾಮಾಜಿಕ ಕ್ಷೇತ್ರದಲ್ಲಿ ತಮ್ಮದೇ ಛಾಪನ್ನು ಮೂಡಿಸಿದರು. ಈ ಸಾಹಿತ್ಯವನ್ನು ಸೃಜಿಸಿದ ವಚನಕಾರರು ಕಾಯಕ ತತ್ವವನ್ನು ಜಗತ್ತಿಗೆ ಕಾಣಿಕೆಯಾಗಿ ನೀಡಿದ್ದಾರೆ. ಇಡೀ ಜಗತ್ತಿನಲ್ಲಿ ಈ ಕಾಯಕ ತತ್ವಕ್ಕೆ ಇರುವ ಶ್ರೇಷ್ಠತೆಯನ್ನು, ಮಹತ್ವವನ್ನು ಅನಾವರಣ ಮಾಡುವುದು ಈ ಲೇಖನದ ಬಹುಮುಖ್ಯ ಉದ್ದೇಶವಾಗಿದೆ.

ವಚನ ಸಾಹಿತ್ಯ ಸಂಸ್ಕೃತದ ಪ್ರಭಾವದಿಂದ ಹುಟ್ಟಿದ ಸಾಹಿತ್ಯ ಪ್ರಕಾರವಲ್ಲ, ವೈದಿಕರ ನಡವಳಿಕೆಗೆ ಬೇಸತ್ತು ತನ್ನದೇ ಭಾಷೆಯಲ್ಲಿ ಸಮರ್ಥವಾಗಿ ಕಟ್ಟಿಕೊಂಡದ್ದಾಗಿದೆ. 'ವಚನ' ಎಂದರೆ ಗದ್ಯದ ವಿಶಿಷ್ಟ ನಿರೂಪಣೆ. ವಚನಗಳನ್ನು ಹಾಡುವುದ್ದರಿಂದ 'ಗೀತ'ಗಳು ಎಂದು ಸಹ ಕರೆಯಲ್ಪಟ್ಟಿವೆ. ಆದರೆ ಗೀತಗಳು ಎಂದರೆ ಪದ್ಯಗಳಲ್ಲ ಎಂಬುದು ಖಚಿತವಾಗಿದೆ. ವಚನ ಸಾಹಿತ್ಯ 'ಮುಕ್ತಕ'ದ ಜಾತಿಗೆ ಸೇರುತ್ತದೆ. ವಚನ ಸಾಹಿತ್ಯ 12ನೇ ಶತಮಾನದಲ್ಲಿ ಪ್ರಾರಂಭವಾದರೂ, ಅದರ ಮಧ್ಯಭಾಗದಲ್ಲಿ ಹೆಚ್ಚು ಹುಲುಸಾಗಿ ಬೆಳೆಯಿತು. ವಚನ ಸಾಹಿತ್ಯ ಲಿಂಗಾಯತ ಧರ್ಮದ ಸಾರ ಸಂಗ್ರಹ, ಆಧ್ಯಾತ್ಮ ಶಾಸ್ತ್ರ, ಷಟ್‌ಸ್ಥಲ ಶಾಸ್ತ್ರ, ಕನ್ನಡದ ಶೈವಾಗಮ, ಕನ್ನಡದ ಉಪನಿಷತ್ತುಗಳು ಎಂಬ ಮನ್ನಣೆಗೂ ಪಾತ್ರವಾಗಿದೆ.

ವಚನಕಾರರ ಮುಖ್ಯ ಉದ್ದೇಶ ನವಸಮಾಜವನ್ನು ನಿರ್ಮಿಸುವುದಾಗಿತ್ತು. ಅದಕ್ಕಾಗಿ ಸಾಮಾಜಿಕ ಆಂದೋಲನವನ್ನು ಪ್ರಾರಂಭಿಸಿದರು. ಇವರ ದೃಷ್ಟಿಯಲ್ಲಿ ಆಂದೋಲನವೆಂದರೆ ಹೊಸ ಜೀವನವನ್ನು ಕಟ್ಟಿಕೊಳ್ಳುವುದು. ಹೊಸ ಜೀವನವೆಂದರೆ ಜನರು ಸರಿ ಯಾವುದು? ತಪ್ಪು ಯಾವುದು? ಎಂಬುದನ್ನು ಆಲೋಚಿಸವಂತೆ ಮಾಡುವುದು. ಹಾಗೆ ಜನರಲ್ಲಿ ಆಲೋಚಿಸುವ ಪ್ರಜ್ಞೆ ಮೂಡಬೇಕಾದರೆ ಅವರಿಗೆ ಆತ್ಮವಿಶ್ವಾಸವನ್ನು ಮೂಡಿಸಬೇಕು. ಹಾಗಾಗಿ ಅವರಲ್ಲಿ ಆತ್ಮವಿಶ್ವಾಸವನ್ನು ಮೂಡಿಸಲು ವಚನಕಾರರು ಕಾಯಕದ ಮಹತ್ವವನ್ನು ಅವರಿಗೆ ತಿಳಿಹೇಳಿದರು. ಕಾಯಕದ ಮೂಲಕ ಹಳೆಯ ಪರಂಪರೆಗೆ ಚುಚ್ಚುಮದ್ದನ್ನು ನೀಡಿದರು.

ದೇವಸ್ಥಾನವನ್ನು ನಿರಾಕರಿಸಿ, ದ್ವಿಜನೂ ಹೊಲೆಯನೂ ಒಂದೇ ಎಂದರು. ನಾವು ದೇವರಿಗೆ ಋಣಿಯೇ ಹೊರತು ರಾಜನಿಗಲ್ಲ ಎಂದರು. ಎಲ್ಲ ವೃತ್ತಿಗಳಿಗೂ ಸಾಮಾಜಿಕವಾಗಿ ಸಮಾನ ಮೌಲ್ಯವನ್ನು ಒದಗಿಸಿಕೊಟ್ಟು ಮೇಲು ಕೀಳೆಂಬ ಜಾತಿಭೇದವನ್ನು ನಿರ್ನಾಮ ಮಾಡಿದರು. ಕೆಳವರ್ಗದವರ ಸಮಷ್ಟಿ ಪ್ರಜ್ಞೆಯನ್ನು ಎಚ್ಚರಗೊಳಿಸಿ, ಅವರಲ್ಲಿ ಆತ್ಮವಿಶ್ವಾಸವನ್ನು ಮೂಡಿಸಿದರು. ಹಾಗಾಗಿ ಮಡಿವಾಳ ಮಾಚಯ್ಯ, ಸಂಬೋಳಿ ನಾಗಿದೇವ, ರಾಯಮ್ಮನಂತಹವರು ಧೈರ್ಯವಾಗಿ ಮೇಲ್ವರ್ಗದವರ ಶೋಷಣೆಯನ್ನು ಪ್ರಶ್ನಿಸಿದರು.

ಲಿಂಗಾಯತ ಧರ್ಮ ಎಂಬುದು ಕನ್ನಡಿಗರ ಧರ್ಮ. ಕನ್ನಡಿಗರು ಕಟ್ಟಿದಂತಹ ಮೊದಲ ಧರ್ಮ ಲಿಂಗಾಯತ. ಇದನ್ನು ವೀರಶೈವ ಧರ್ಮವೆಂದು ಕೆಲವರು ತಪ್ಪು ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಆದರೆ "ವೀರಶೈವ ದ್ವೈತ, ಲಿಂಗಾಯತ ಅದ್ವೈತವಾದ್ದರಿಂದ ಅದನ್ನು ವೀರಶೈವ ಅನ್ನಬೇಡಿ, ಲಿಂಗಾಯತ ಅನ್ನಿ" ಎನ್ನುತ್ತಾರೆ ಎಂ.ಎಂ. ಕಲ್ಬುರ್ಗಿ. ಲಿಂಗಾಯತರಿಗೆ ಶಿವನಿಗಿಂತ ಶಿವಭಕ್ತರೇ ದೊಡ್ಡವರಾಗಿ ಕಂಡುಬರುತ್ತಾರೆ. ಇವರು ಸ್ಥಾವರಲಿಂಗ ಪೂಜೆಯನ್ನೂ, ದೇವಾಲಯ ನಿರ್ಮಾಣವನ್ನು ವಿರೋಧಿಸಿ, ಲಿಂಗವನ್ನು ದೇಹದ ಮೇಲೆ ಧರಿಸಿಕೊಂಡು ಅಥವಾ ತಮ್ಮ ಕರತಲದಲ್ಲಿಟ್ಟುಕೊಂಡು ಪೂಜಿಸಬಹುದು ಎಂದು ಹೇಳಿದರು.

ಲಿಂಗಾಯತದ ನಾಲ್ಕು ತತ್ವಗಳೆಂದರೆ ಆತ್ಮೋದ್ಧಾರ, ಸಮಸಮಾಜ, ಕಾಯಕ ಮತ್ತು ದಾಸೋಹ. "ನಾನು ದುಡಿಯಬೇಕು, ನಾವು ಉಣ್ಣಬೇಕು" ಎಂಬ ಅನುಭಾವ ಪಂಥವೇ ಲಿಂಗಾಯತ. ಆತ್ಮೋದ್ಧಾರ ಎಂದರೆ ಆತ್ಮಶೋಧನೆ ಮಾಡಿಕೊಳ್ಳುವುದು ಎಂದರ್ಥ. ತನ್ನನ್ನು ತಾನು ತಿದ್ದಿಕೊಂಡಾಗ ಮಾತ್ರ ಲೋಕವನ್ನು ತಿದ್ದಲು ಸಾಧ್ಯ. ಹೀಗೆ ತಿದ್ದಿಕೊಳ್ಳುವ ಕ್ರಿಯೆಯಲ್ಲಿ ವ್ಯಕ್ತಿ ತನ್ನ ಜೊತೆಯಲ್ಲಿಯೇ ಹೋರಾಡಬೇಕಾಗುತ್ತದೆ. ಸಮಸಮಾಜವನ್ನು ನಿರ್ಮಿಸಲು ಶಿವಭಕ್ತರೆಲ್ಲರೂ ಒಂದೇ ಎಂದರು. ಅದರ ಮೂಲಕ ಜನರಿಗೆ ಕೇಡಾಗಿ ಕಾಡುತ್ತಿದ್ದ ವರ್ಣವ್ಯವಸ್ಥೆಯನ್ನು ನಿರ್ನಾಮ ಮಾಡಿದರು. ಕಾಯಕವೆಂದರೆ ಬರೀ ದುಡಿಮೆಯಲ್ಲ. ಶ್ರಮದಿಂದ ದುಡಿದು, ಸಮಾಜದ ಸಹಕಾರದೊಂದಿಗೆ ಗಳಿಸಿದನ್ನು ಮತ್ತೆ ಸಮಾಜಕ್ಕೆ ಮರಳಿ ನೀಡುವುದಾಗಿದೆ. ಶ್ರದ್ಧೆಯಿಂದ ಸಮಯಾಚಾರವನ್ನು ನಿರ್ವಹಿಸಬೇಕು. ಅಂದರೆ ಕಾಯಕದಿಂದ ಬಂದದ್ದನ್ನು ಗುರು–ಲಿಂಗ–ಜಂಗಮಕ್ಕೆ ಅರ್ಪಿಸಿ ಸತ್ಯವಂತರಾಗಿರಬೇಕು. ಎಲ್ಲರೂ ದುಡಿಯಲೇಬೇಕು, ಎಲ್ಲಾ ವೃತ್ತಿಗಳನ್ನು ಗೌರವಿಸಬೇಕು. ಎಲ್ಲರೂ ತಮ್ಮ ದುಡಿಮೆಯ ಫಲವನ್ನು ಇತರರೊಂದಿಗೆ ಹಂಚಿಕೊಳ್ಳಬೇಕು. ಹೀಗೆ ಹಂಚಿಕೊಳ್ಳುವಾಗ ತನ್ನ ಐಶ್ವರ್ಯದಿಂದಾಗಲೀ, ವೃತ್ತಿಯಿಂದಾಗಲೀ ತಾನು ಶ್ರೇಷ್ಠವೆಂದು ಹೇಳುವಂತಿಲ್ಲ. ದಾಸೋಹ ಎಂಬ ಪರಿಕಲ್ಪನೆ 'ಸಮಾಜದಿಂದ ಪಡೆದದನ್ನು ಮತ್ತೆ ಸಮಾಜಕ್ಕೆ ಮರಳಿ ನೀಡುವುದೇ ದಾಸೋಹ. ದಾನವನ್ನು ನಾಶಗೊಳಿಸುವ ಉದ್ದೇಶದಿಂದ ದಾಸೋಹವನ್ನು ತರಲಾಯಿತು.

ಕಾರ್ಲ್‌ಮಾರ್ಕ್ಸ್ ತನ್ನ ಚಿಂತನ ಲಹರಿ ಹರಿಸುವ 600 ವರ್ಷಗಳ ಮುಂಚೆಯೇ ಬಸವಣ್ಣ ತನ್ನ ಕಾಯಕ ತತ್ತ್ವವನ್ನು ಜಗತ್ತಿಗೆ ಕೊಡುಗೆಯಾಗಿ ನೀಡಿರುವುದನ್ನು ಕಾಣಬಹುದು. ಅವರ ಭಕ್ತಿ ಕೇವಲ ಆಧ್ಯಾತ್ಮಕ್ಕೆ ಮಾತ್ರ ಸಂಬಂಧಿಸಿದಲ್ಲ, ಕರ್ಮ, ವಿಧಿ, ದೈವ ಎಂಬ ಬಲೆಗೆ ಬಿದ್ದು ಹೊದ್ದಾಡಿದ್ದಲ್ಲ. ಅವರು ಲೋಕದ ಹಿತಕ್ಕಾಗಿಯೇ ಭಕ್ತಿಯ ಅಸ್ತ್ರವನ್ನು ಬಳಸಿಕೊಂಡು, ಸಾವಿಗೂ ಹೆದರದೆ ಲೋಕಹಿತಕ್ಕಾಗಿ ದುಡಿದರು. ಇವರ ಪ್ರಕಾರ ಶರಣಾಗತಿ ಎಂಬುದು ಲೌಕಿಕದ ಒಡೆಯನಿಗಲ್ಲ, ಅಲೌಕಿಕದ ಆನಂದಕ್ಕಾಗಿ.

"ಬಟ್ಟೆ ಹೊಗೆಯುವ ದೋಬಿ ಮಾಚಯ್ಯ ತಾನು ಶಿವಭಕ್ತರ ಬಟ್ಟೆಗಳನ್ನಲ್ಲದೆ, ರಾಜನೂ ಸೇರಿದಂತೆ ಬೇರೆಯವರ ಬಟ್ಟೆಗಳನ್ನು ಒಗೆಯುವುದಿಲ್ಲವೆಂದು ಕಲ್ಯಾಣದ ಬೀದಿ ಬೀದಿಗಳಲ್ಲಿ ಘೋಷಿಸಿಕೊಂಡನು. ಅಸ್ಪೃಶ್ಯರು ಊರೊಳಕ್ಕೆ ಬಂದರೆ ಕೋಲು ಕುಟ್ಟುತ್ತ 'ಸಂಬೋಳಿ', 'ಸಂಬೋಳಿ' ಎಂದು ಕೂಗುತ್ತ ಜನರಿಗೆ ಎಚ್ಚರಿಕೆ ಕೊಡಬೇಕಿತ್ತು. ಆದರೆ ಸಂಬೋಳಿ

ನಾಗಿದೇವ ಹಾಗೆ ಕೂಗುವುದನ್ನು ಅದೇ ಕಲ್ಯಾಣದ ಬೀದಿಗಳಲ್ಲಿ ನಿಲ್ಲಿಸಿ ಬಿಟ್ಟನು."[1] ದೀನಾವಸ್ಥೆಯಲ್ಲಿದ್ದಂತಹ ಜನರು ರಾಜನ ವಿರುದ್ಧ, ಪುರೋಹಿತಶಾಹಿ ವಿರುದ್ಧ ಸೆಟೆದು ನಿಂತದ್ದು ಇದೇ ಕಾಯಕ ತತ್ವದ ಬಲದಿಂದ ಎಂದು ಹೇಳಬಹುದು. ಮಾರ್ಕ್ಸ್‌ನ ಸಮಾಜವಾದದಿಂದಲೂ ಸಹ ಈ ರೀತಿಯ ತಳಸಮುದಾಯದವರ ಆತ್ಮವಿಶ್ವಾಸವನ್ನು ಹೆಚ್ಚಿಸಲು ಸಾಧ್ಯವಾಗಿಲ್ಲ.

ಸಾಮಾಜಿಕ ಮತ್ತು ಧಾರ್ಮಿಕ ವ್ಯವಸ್ಥೆಯ ಸುಧಾರಣೆಯಲ್ಲಿ ಕಾಯಕ ತತ್ವದ ಕಾಣ್ಕೆ ಬಹುಮುಖ್ಯವಾಗಿದೆ. ಧರ್ಮಕ್ಕೆ ಅಂಟಿಕೊಂಡಿದ್ದ ವರ್ಣವ್ಯವಸ್ಥೆಯನ್ನು ಮೊನಚಾದ ಕೊಡಲಿಯಿಂದ ಕತ್ತರಿಸಿ ಹಾಕಲಾಯಿತು. ಶಿವಭಕ್ತಿಗಿಂತಲೂ ಕಾಯಕಕ್ಕೆ ಹೆಚ್ಚಿನ ಮನ್ನಣೆಯನ್ನು ಕೊಟ್ಟಿದ್ದರು ಎಂಬುದು ನುಲಿಯ ಚಂದಯ್ಯನಿಗೆ ಸಂಬಂಧಿಸಿದ ಒಂದು ಪುರಾಣ ಕತೆಯು ಅನಾವರಣ ಮಾಡುತ್ತದೆ. ಅಂದರೆ ಕಾಯಕವನ್ನು ಮಾಡುತ್ತಿರುವಾಗ ಗುರು, ಲಿಂಗ, ಜಂಗಮವನ್ನು ಮರೆತರೂ ತಪ್ಪಿಲ್ಲ ಎನ್ನುತ್ತದೆ ಪುರಾಣ ಕತೆ. ಹುಲ್ಲು ಕೊಯ್ದು ತಂದು ಹಗ್ಗವಾಗಿ ಹೊಸೆದು ಅವುಗಳನ್ನು ಮಾರಿ, ಜೀವನವನ್ನು ಸಾಗಿಸುವ ವ್ಯಕ್ತಿಗೆ ಆ ಕೆಲಸವೇ ಶಿವನ ಪೂಜೆಯಾಗುತ್ತದೆ. ಕಾಯಕವನ್ನು ಮಾಡುವ ವ್ಯಕ್ತಿಗೆ ಇಷ್ಟಲಿಂಗಕ್ಕಿಂತಲೂ ಅವನ ಕೆಲಸವೇ ಶ್ರೇಷ್ಠತೆಯನ್ನು ಪಡೆದುಕೊಳ್ಳುತ್ತದೆ.

ಕಾಲಧರ್ಮಕ್ಕೆ ಅನುಗುಣವಾಗಿ ಶಿವನನ್ನು ಆರಾಧ್ಯ ದೈವವನ್ನಾಗಿ ಮಾಡಿಕೊಂಡು, ಎಲ್ಲರನ್ನೂ ಸೇರಿಸಿ ಒಂದು ಮಾಡಿದರು. ಎಲ್ಲರಿಗೂ ಸಮಾನತೆ ದೊರೆಯಬೇಕೆಂದು ತಮ್ಮವರೊಂದಿಗೆ ಹೆಣಗಾಡಿದ ವಚನಕಾರರು ಕಾಯಕವೇ ಶ್ರೇಷ್ಠವೆಂದು ಸಾರಿದರು. ಮತಕ್ಕಿಂತ ಜಾತಿಯೇ ಪ್ರಧಾನವಾಗಿರುವ ಭಾರತದಲ್ಲಿ ಕಾಯಕದ ಶ್ರೇಷ್ಠತೆಯನ್ನು ಹರಡುವುದು ಮುಖ್ಯವಾಗಿತ್ತು. ಏಕೆಂದರೆ ಒಂದು ಮತದಿಂದ ಮತ್ತೊಂದು ಮತಕ್ಕೆ ಹೋದ ವ್ಯಕ್ತಿ ತನ್ನ ಜಾತಿಯನ್ನು ಹೊತ್ತುಕೊಂಡೇ ಹೋಗುತ್ತಾನೆ. ಹೀಗಾಗಿ ಜಾತಿ ಆ ವ್ಯಕ್ತಿಯ ಮೇಲು ಕೀಳನ್ನು ನಿರ್ಧರಿಸುತ್ತದೆ. ಆದ್ದರಿಂದ ಲಿಂಗಾಯತ ಧರ್ಮವು ಇಷ್ಟಲಿಂಗದ ಪರಿಕಲ್ಪನೆಯನ್ನು ಬಿತ್ತಿ, ಸಾಮಾಜಿಕ ಅಸಮಾನತೆಯನ್ನು ತೊಡೆದುಹಾಕಲು ಕಾಯಕ ತತ್ವವನ್ನು ಪ್ರಸಾರ ಮಾಡಿದರು. ಈ ತತ್ವದ ಪ್ರಕಾರ ವ್ಯಕ್ತಿ ಭಕ್ತಿಯಿಂದ ಮಾಡುವ ಯಾವುದೇ ವೃತ್ತಿಯು ಶ್ರೇಷ್ಠವೇ ಆಗಿದೆ. ಆದರೆ ತನ್ನ ದುಡಿಮೆಯ ಒಂದು ಭಾಗವನ್ನು ಇತರರಿಗೆ ಹಂಚಬೇಕು. ಈ ರೀತಿಯ ಶ್ರೇಷ್ಠವಾದ ತತ್ವವನ್ನು ಜಗತ್ತಿನ ಯಾವುದೇ ತತ್ವ, ಸಿದ್ಧಾಂತಗಳು ಸಾರುವುದಿಲ್ಲ.

ಎಲ್ಲಾ ಜಾತಿ, ಮತ, ವರ್ಗಗಳಿಂದ ಬಂದ್ದಂತಹ ಕಾಯಕ ಯೋಗಿಗಳು ಒಂದು ಕಡೆ ಕಲೆತು, ಯಾವುದೇ ಕುಲ, ಜಾತಿ, ಶ್ರೀಮಂತ, ಬಡವ, ಅಧಿಕಾರಿ, ಸೇವಕ ಎಂಬ ಭೇದಭಾವಗಳಿಲ್ಲದೆ ಮುಕ್ತ ಮನಸ್ಸಿನಿಂದ ಚರ್ಚಿಸುವ ಅನುಭಾವಗೋಷ್ಠಿಗಳನ್ನು ನಡೆಸುತ್ತಿದ್ದರು. ಇಂತಹ ಅನುಭಾವಗೋಷ್ಠಿಯ ರೂವಾರಿಯಾದ ಬಸವಣ್ಣನಿಗೆ ಪ್ರಭುತ್ವ ಮತ್ತು ಸಂಪ್ರದಾಯವಾದಿಗಳು ವಿರೋಧಿಗಳಾಗಿದ್ದರೂ ಜನತೆಯ ಸಂಪೂರ್ಣ ಬೆಂಬಲ ದೊರೆತಿತ್ತು. ಜನಸಾಮಾನ್ಯರಿಗೆ ಹೊಸ ರೀತಿಯಲ್ಲಿ ಆಲೋಚಿಸುವಂತೆ ಮಾಡಿದ ವಚನಕಾರರು ನಡೆದಂತೆ ನುಡಿದರು. ಹಾಗಾಗಿ ಅವರಿಗೆ ಜನತೆಯ ಹಿತವನ್ನು ಸಾಧಿಸಲು ಸಾಧ್ಯವಾಯಿತು.

ಕಾಯಕದಿಂದ ಶೇಖರಣೆಗೊಂಡ ಸಂಪತ್ತನ್ನು ವಿತರಣೆ ಮಾಡಬೇಕು ಎನ್ನುತ್ತಾರೆ ವಚನಕಾರರು. ಇದೇ ಅವರ ಮಾತಿನಲ್ಲಿ 'ದಾಸೋಹ' ಎನಿಸಿಕೊಂಡಿದೆ. ಅನ್ನದ ಮಹತ್ವವು ವಚನಕಾರರಿಗೆ ಚೆನ್ನಾಗಿ ತಿಳಿದಿತ್ತು. ಜೇಡರ ದಾಸಿಮಯ್ಯನವರ ವಚನವು ಈ ರೀತಿಯಾಗಿ ಹೇಳುತ್ತದೆ :

"ಹಸಿವೆಂಬ ಹೆಬ್ಬಾವು ಬಸಿರ ಬಂದು ಹಿಡಿದಡೆ
ವಿಷವೇರಿತ್ತಯ್ಯಾ ಆಪಾದಮಸ್ತಕಕ್ಕೆ
ಹಸಿವಿಗನ್ನವನಿಕ್ಕಿ ವಿಷವನಿಳುಹಬಲ್ಲಡೆ

[1] ವಚನ ಸಾಹಿತ್ಯ ; ಡಾ. ಎಂ. ಚಿದಾನಂದ ಮೂರ್ತಿ ; ಪು.ಸಂ.47.

ವಸುಧೆಯೊಳಗಾತನೇ ಗಾರುಡಿಗ ರಾಮನಾಥ."[2]

ಹಸಿವನ್ನು ವಿಷಕ್ಕೆ ಹೋಲಿಸಿರುವುದನ್ನು ನೋಡಿದರೆ, ಇವರು ಬಡವರನ್ನು ಬಹಳ ಹತ್ತಿರದಿಂದ ನೋಡಿದ್ದಾರೆ ಎಂಬುದು ತಿಳಿದುಬರುತ್ತದೆ. ಏಕೆಂದರೆ ಹಸಿವಿನ ತೀವ್ರತೆಯನ್ನು ಅನುಭವಿಸಿದವರು ಮಾತ್ರ ಹೇಳಬಲ್ಲರು. ಅದಕ್ಕಾಗಿಯೇ ವಚನಕಾರರು ತ್ರಿವಿಧ ದಾಸೋಹಗಳಲ್ಲಿ ಅನ್ನ ದಾಸೋಹವು ಮಹತ್ವಪೂರ್ಣವಾದುದು ಎಂಬುದನ್ನು ಅರಿತುಕೊಂಡಿದ್ದರು.

ನಾವು ಮಾಡುವ ಕೆಲಸವು ಸ್ವಾರ್ಥದಲ್ಲಿ ಮುರುಟಿ ಹೋಗದೇ ಪರಾರ್ಥದಲ್ಲಿ ಸಾರ್ಥಕತೆಯನ್ನು ಪಡೆದುಕೊಳ್ಳಬೇಕು ಎಂಬುದು ಬಸವಣ್ಣನವರ ಕಾಯಕ ತತ್ವದ ಆಶಯವಾಗಿದೆ.

"ಮಾಡುವ ಭಕ್ತನ ಕಾಯ
ಬಾಳೆಯ ಕಂಬದಂತಿರಬೇಕು !
ಮೆಲ್ಲಮೆಲ್ಲನೆ ಹೊರೆಯೆತ್ತಿ ನೋಡಿದರೆ
ಒಳಗೆ ಕೆಚ್ಚಿಲ್ಲದಿರಬೇಕು !
ಮೇಲಾದ ಫಲವ ನಮ್ಮವರು
ಬೀಜ ಸಹಿತ ನುಂಗಿದರು.
ಎನಗಿನ್ನಾವ ಭವವಿಲ್ಲ ಕಾಣಾ
ಕೂಡಲಸಂಗಮದೇವ."[3]

ಎಂಬ ಬಸವಣ್ಣನವರ ಈ ವಚನಕ್ಕೆ ಎಲ್. ಬಸವರಾಜು ಅವರ ವಿಶ್ಲೇಷಣೆ ಈ ರೀತಿಯಾಗಿದೆ. "ಬಾಳೆಯ ದಿಂಡನ್ನು ಪೊರೆಯಾದ ಮೇಲೆ ಪೊರೆಯೆತ್ತಿ ಸುಲಿದರೆ, ಉಳಿಯುವುದು ಶೂನ್ಯ–ನಿಶ್ಶೂನ್ಯ ! ಒಳಗೆ ಕೆಚ್ಚೆಂಬುದರ ಸೊಲ್ಲಿರುವುದಿಲ್ಲ. ಹಾಗೆಯೇ ಲೋಕಸೇವಾನಿರತನಾದ ಭಕ್ತನನ್ನು ಅಂತರಂಗದ ವರೆಗೂ ಹಲವಾರು ಸ್ತರಗಳಲ್ಲಿ ಶೋಧಿಸಿ ನೋಡಿದರೂ ಅಹಂಮಮಕಾರದ ಕೆಚ್ಚಿಲ್ಲದಿರಬೇಕು. ಆ ಶಿವಾರ್ಪಣಭಾವದ ಸೂಕ್ಷ್ಮಾವಸ್ಥೆಯೇ ಮತ್ತು ಅಹಂ–ಮಮಕಾರಗಳ ನಾಸ್ತಿಯೇ ಶೂನ್ಯ–ನಿಶ್ಶೂನ್ಯವೆಂಬುದು, ಬಯಲು–ನಿರ್ವಯಲೆಂಬುದು, ನಿರ್ವಾಣ–ನೈಜ ಮುಕ್ತಿಯೆಂಬುದು. ಆ ಕೆಚ್ಚಿಲ್ಲದ ಬಾಳೆಗೆ ಫಲವಾದರೇನು? ಅದರೊಳಗೆ ಮರುಹುಟ್ಟಿನ ಬೀಜವಿಲ್ಲ ! ನಿರಾಡಂಬರ ಭಕ್ತನ ಪಾಲಿಗೆ ಕರ್ಮಫಲ ಸಾಲು ಕಟ್ಟಿ ಬರಬಹುದು. ಆದರೆ ಅದೆಲ್ಲ ಪರಾರ್ಥನಿವೇದಿತ. ಅದರೊಳಗೆ ಅವನು ಅನಾಸಕ್ತ. ಅಷ್ಟೇ ಅಲ್ಲದೆ ಕರ್ಮ–ಫಲ ಉಭಯ ಬಂಧರಹಿತವಾದ ಅವನ ಚೇತನ ನಿರಾಕಾರ ಪರಬ್ರಹ್ಮದಲ್ಲಿ ಐಕ್ಯವಾಗಿ ಇತರೇತರವನ್ನರಿಯದೆ ತನ್ಮಯವಾಗಿರುವುದು."[4]

"ಆಡಿದರೇನೋ, ಹಾಡಿದರೇನೋ, ಓದಿದರೇನೋ ತ್ರಿವಿಧ ದಾಸೋಹವಿಲ್ಲದನ್ನಕ್ಕ? ಆಡದೆ ನವಿಲು? ಹಾಡದೆ ತಂತಿ? ಓದದೇ ಗಿಳಿ? ಭಕ್ತಿಯಿಲ್ಲದವರನೊಲ್ಲ ಕೂಡಲಸಂಗಮದೇವ." ಬಸವಣ್ಣನವರ ಈ ವಚನ ದಾಸೋಹಕ್ಕೆ ಎಷ್ಟು ಮಹತ್ವವನ್ನು ಕೊಟ್ಟಿದ್ದರು ಎಂಬುದನ್ನು ಸೂಚಿಸುತ್ತದೆ. ಅನ್ನ, ಅಕ್ಷರ ಮತ್ತು ಆಶ್ರಯಗಳನ್ನು ನೀಡದ ಭಕ್ತಿ ಎಂತಹದ್ದು. ಅದರಿಂದ ಯಾವ ಪ್ರಯೋಜನವಿದೆ? ನವಿಲು, ತಂತಿ ಹಾಗೂ ಗಿಳಿಯಂತೆ ಆಡಿ, ಹಾಡಿ, ಓದಿ ನಿಷ್ಪ್ರಯೋಜಕವಾಗಬಾರದು. ಆಡಿದ ಮಾತಿನಂತೆ, ಕಲಿತ ವಿದ್ಯೆಯಂತೆ ನಾವು ಜನರಿಗೆ ತ್ರಿವಿಧ ದಾಸೋಹವನ್ನು ಒದಗಿಸಿಕೊಡಬೇಕು. ನಾವು ಬಡವರಾದರೂ ನಮ್ಮ ಮನಸ್ಸು ಶ್ರೀಮಂತವಾಗಿರಬೇಕು. ಶುಚಿ ಜೀವನವನ್ನು ಮಾಡುತ್ತಾ, ಮತ್ತೊಬ್ಬರಲ್ಲಿ ಆತ್ಮವಿಶ್ವಾಸವನ್ನು ಮೂಡಿಸಬೇಕು.

"ಒಂದು ಮೊಲಕ್ಕೆ ನಾಯನೊಂಬತ್ತು ಬಿಟ್ಟಂತೆ,
ಎನ್ನ ಬಿಡು ತನ್ನ ಬಿಡೆಂಬುದು ಕಾಯವಿಕಾರ ;

---

[2] ವಚನ ಸಾಹಿತ್ಯ ; ಡಾ. ಎಂ. ಚಿದಾನಂದ ಮೂರ್ತಿ : ಪು.ಸಂ.56.
[3] ಬಸವಣ್ಣನವರ ವಚನಗಳು ; (ಸಂ) ಡಾ. ಎಲ್. ಬಸವರಾಜು ; ಭಕ್ತಸ್ಥಲ ; 306ನೆಯ ವಚನ ; ಪು.ಸಂ.127.
[4] ಬಸವಣ್ಣನವರ ವಚನಗಳು ; (ಸಂ) ಡಾ. ಎಲ್. ಬಸವರಾಜು ; ಪೀಠಿಕೆ ; ಜೀವನ ದರ್ಶನ ; ಪು.ಸಂ.29.

ಎನ್ನ ಬಿಡು ತನ್ನ ಬಿಡೆಂಬುದು ಮನೋವಿಕಾರ ;
ಕರಣೇಂದ್ರಿಯಗಳೆಂಬ ಸೊಣಗ ಮುಟ್ಟದ ಮುನ್ನ
ಮನ ನಿಮ್ಮನೆಯ್ದುಗೆ ಕೂಡಲಸಂಗಮದೇವ."[5]

ನಮ್ಮ ಕಾಮನೆಗಳು ಹೆಚ್ಚುತ್ತಾ ಹೋದಂತೆ ಅವುಗಳನ್ನು ಈಡೇರಿಸಿಕೊಳ್ಳಲು ತಮ್ಮ ತನುವನ್ನು ವಿಕಾರಗೊಳಿಸಿಕೊಳ್ಳುತ್ತೇವೆ. ಮನಸ್ಸನ್ನು ಹಾಳು ಮಾಡಿಕೊಂಡು, ನೆಮ್ಮದಿಯನ್ನು ಕಳೆದುಕೊಳ್ಳುತ್ತೇವೆ. ಗುರಿಯನ್ನು ಮುಟ್ಟದೆ ಅಡ್ಡದಾರಿಯನ್ನು ಹಿಡಿಯುವ ಸಂಭವವೇ ಹೆಚ್ಚು. ಆದ್ದರಿಂದಲೇ ಕಾಯಕ ತತ್ವವು ಐಶ್ವರ್ಯವನ್ನು ಅತಿಯಾಗಿ ಸಂಗ್ರಹಿಸಬಾರದು ಎಂದು ಹೇಳುತ್ತದೆ. ಈ ತತ್ವವು ಐಶ್ವರ್ಯಕ್ಕೆ ಹೆಚ್ಚಿನ ಮಹತ್ವವನ್ನು ಕೊಡುವುದಿಲ್ಲ. ಬೆಲೆಯಿಲ್ಲದ ಐಶ್ವರ್ಯವನ್ನು ಯಾರು ಸಂಗ್ರಹಿಸುತ್ತಾರೆ ಹೇಳಿ? ಒಂದು ದಿನ ಆಯ್ದಕ್ಕಿ ಮಾರಯ್ಯ ಅಗತ್ಯಕ್ಕಿಂತ ಹೆಚ್ಚಿನ ಅಕ್ಕಿಯನ್ನು ತಂದಾಗ ಅದನ್ನು ಅವನ ಹೆಂಡತಿ ಲಕ್ಷ್ಮಮ್ಮಳೇ ವಿರೋಧಿಸಿ, 'ಆಸೆಯೆಂಬುದು ಅರಸಿಂಗಲ್ಲದೆ ಶರಣನಿಗಲ್ಲ' ಎಂದು ಟೀಕಿಸಿ, ಆ ಅಕ್ಕಿಯನ್ನು ಹಿಂದಕ್ಕೆ ಕಳುಹಿಸುತ್ತಾಳೆ.

ಪರ್ಸಿ ಬ್ರೌನ್ ಎಂಬ ವಿದ್ವಾಂಸ ಲಿಂಗಾಯತ ಸಾಹಿತ್ಯವನ್ನು 'ಜಂಗಮ ಸಾಹಿತ್ಯ'ವೆಂದು ಕರೆದು ವಚನಕಾರರ ತಾತ್ವಿಕೆಯನ್ನು ವ್ಯಕ್ತಪಡಿಸಿರುವನಲ್ಲದೆ ಜಂಗಮರನ್ನು 'ಬ್ರಾಹ್ಮಣ ವಿರೋಧ ಮತ' ಎಂದು ಕರೆದಿದ್ದಾನೆ. ಇಲ್ಲಿಯವರೆಗೂ ಸರಿಯಾಗಿಯೇ ಇದೆ. ಆದರೆ ಮುಂದುವರಿದು ಇವನು ಬಸವಣ್ಣನವರ ಕ್ರಾಂತಿಕಾರಕ ವಿಚಾರಗಳನ್ನು ಪಶ್ಚಿಮದ 'ಪ್ರೊಟೆಸ್ಟೆಂಟ್ ಚಳುವಳಿ'ಗೆ ಹೋಲಿಸಿದ್ದಾನೆ. ಇದೊಂದು ಧೂರ್ತ ಹೋಲಿಕೆ ಎಂದು ಹೇಳಬಹುದು. 16ನೆಯ ಶತಮಾನದಲ್ಲಿ ಆರಂಭವಾದ ಕ್ರಿಶ್ಚಿಯನ್ ಧರ್ಮದ ಒಂದು ಶಾಖೆಯಾದ ಪ್ರೊಟೆಸ್ಟೆಂಟ್ ಧರ್ಮವು ಕ್ಯಾಥೋಲಿಕ್ ಚರ್ಚ್ ಅನುಸರಿಸುತ್ತಿದ್ದ ದೋಷಗಳನ್ನು ನಿವಾರಿಸುವ ಗುರಿಯನ್ನು ಹೊಂದಿತ್ತು. ಇದು ಮೋಕ್ಷವು ದೈವಿಕ ಅನುಗ್ರಹದಿಂದ ದೊರೆಯುತ್ತದೆ ಎಂಬುದನ್ನು ನಂಬಿತ್ತು. ಇದು ಕ್ರಿಶ್ಚಿಯನ್ ನಂಬಿಕೆ ಮತ್ತು ಆಚರಣೆಗೆ ಅಧಿಕಾರದ ಏಕೈಕ ದೋಷರಹಿತ ಮೂಲವಾಗಿ ಬೈಬಲ್‌ಅನ್ನು ಪ್ರತಿಪಾದಿಸುತ್ತದೆ. ಇದೊಂದು ಪಾಪಗಳಿಗೆ ತಾತ್ಕಾಲಿಕ ಶಿಕ್ಷೆಯನ್ನು ಉಪಶಮನ ಮಾಡಲು ಹುಟ್ಟಿಕೊಂಡದ್ದು. ಇವರು ಅದೃಶ್ಯ ಚರ್ಚ್‌ನ ಪರಿಕಲ್ಪನೆಯನ್ನು ಅನುಸರಿಸುತ್ತಾರೆ ಎಂದ ಮಾತ್ರಕ್ಕೆ ಕೆಳವರ್ಗದವರಿಗೂ ಸಮಾನ ಸ್ಥಾನಮಾನವನ್ನು ಕಲ್ಪಿಸಿಕೊಟ್ಟ ಶ್ರೇಷ್ಠ ಕಾಯಕ ತತ್ವವನ್ನು ಹೊಂದಿರುವ ಲಿಂಗಾಯತ ಧರ್ಮವನ್ನು ಪ್ರೊಟೆಸ್ಟಂಟ್ ಧರ್ಮಕ್ಕೆ ಹೋಲಿಸಿರುವುದು ಸಾಧುವಾದುದ್ದಲ್ಲ. ಅದು ಏನೇ ಇರಲಿ ವಚನಕಾರರ ಕಾಯಕ ತತ್ವ ವಿಶ್ವವೇ ಮೆಚ್ಚಬೇಕಾದ ಶ್ರೇಷ್ಠ ತತ್ವವಾಗಿದೆ.

ಹೀಗೆ ಕಾಯಕ ತತ್ವವು ಐಶ್ವರ್ಯವನ್ನು ಸಂಗ್ರಹಿಸುವುದನ್ನು ವಿರೋಧಿಸುತ್ತದೆ. ನಮಗೆ ಅನ್ನದ ಕೊರತೆಯುಂಟಾದರೂ ಸರಿಯೇ, ಆತ್ಮವಿಶ್ವಾಸಕ್ಕೆ ಕೊರತೆ ಉಂಟಾಗಬಾರದು. ನಾವು ದೀನಾವಸ್ಥೆಯಿಂದ, ಬಡತನದಿಂದ ಹೊರಬಂದು ಒಳ್ಳೆಯ ಬಟ್ಟೆಗಳನ್ನು ಹಾಕಿಕೊಳ್ಳಬೇಕು ಎಂಬ ಸಾತ್ವಿಕತೆಯನ್ನು ಸಾರುತ್ತದೆ. ಜೊತೆಗೆ ಧರ್ಮವೆಂಬುದು ನಂಬಿಕೆಗೆ ಬಿಟ್ಟ ವಿಚಾರ. ಧರ್ಮದ ವಿಚಾರವಾಗಿ ಇರುವ ನಂಬಿಕೆಗಳನ್ನು ಗಟ್ಟಿಗೊಳಿಸಲು ಆಗಾಗ್ಗೆ ಜನರನ್ನು ಒಂದೆಡೆ ಸೇರಿಸಿ, ಅನಾಚಾರವನ್ನೇ ಆಚಾರವೆಂದು ಬಡವರನ್ನು, ದೀನ–ದಲಿತರನ್ನು ಅದಕ್ಕೆ ಬಲಿಕೊಡುವ ಕ್ರಿಯೆಯನ್ನು ಬಹಳ ವ್ಯವಸ್ಥಿತವಾಗಿ ಮಾಡಲಾಗುತ್ತದೆ. ಇಂತಹ ಕುತಂತ್ರಗಳಿಂದ ದೂರ ಉಳಿದು, ಸಕಲ ಪ್ರಾಣಿಗಳಿಗೂ ಲೇಸನ್ನು ಬಯಸುವ, ಮಾನವೀಯತೆಯನ್ನು ಉಸಿರಾಡುವ ಪ್ರಜ್ಞೆಯನ್ನು ಬೆಳೆಸಿಕೊಳ್ಳಬೇಕು ಎನ್ನುತ್ತದೆ. ಆದರೆ ಇಂತಹ ಶ್ರೇಷ್ಠತೆಯನ್ನು ಹೊಂದಿರುವ ಕಾಯಕ ತತ್ವವನ್ನು ಬದಿಗೊತ್ತಿ ಇಂದಿಗೂ ಜಗತ್ತಿನಲ್ಲಿ ಕಾರ್ಲ್‌ಮಾರ್ಕ್ಸ್ ಒಬ್ಬನೇ ಏಕಮೇವ ಪೂಜನೀಯ ಮತ್ತು ಪ್ರೇರಿತ ವ್ಯಕ್ತಿಯಾಗಿರುವಂತೆ ಕಂಡುಬರುತ್ತಾನೆ. ಆದರೆ ಎಲ್. ಬಸವರಾಜು ಅವರ ಪ್ರಕಾರ ಊರು–ಕೇರಿಗಳಲ್ಲಿ ಹೊಲ–ಕೆರೆ–ಕುಲುಮೆಗಳಲ್ಲಿ ನಮ್ಮಂತೆಯೇ

[5] ಬಸವಣ್ಣನವರ ವಚನಗಳು ; (ಸಂ) ಡಾ. ಎಲ್. ಬಸವಾರಾಜು ; ಭಕ್ತಸ್ಥಲ ; 23ನೆಯ ವಚನ ; ಪು.ಸಂ.55.

ನಿತ್ಯ ಜೀವನದಲ್ಲಿ ನಡೆದು, ನಡೆದಂತೆ ನುಡಿದು, ನುಡಿದಂತೆ ನಡೆದು, ನಡೆ–ನುಡಿಗಳ ನಡುವಣ ನಂಟನ್ನು ಹಿಗ್ಗಿಸಿ ನೆರೆಹೊರೆಯವರಂತೆ ನೈಜವಾಗಿ ಕಾಣುವ ಶಿವಶರಣರು ಜಗತ್ತಿಗೆ ಪ್ರೇರಕ ಶಕ್ತಿಗಳಾಗಿ ಕಂಡುಬರಬೇಕಾಗಿದೆ. ಅದರಲ್ಲೂ ಬಸವಣ್ಣನವರು ವಿಶ್ವ ಬಾಂಧವ್ಯವನ್ನು ಹರಡುವುದರ ಮೂಲಕ ವಿಶ್ವಚೇತನವನ್ನು ಮೈಗೂಡಿಸಿಕೊಂಡ ಜಗತ್ ಶ್ರೇಷ್ಠ ವ್ಯಕ್ತಿಯಾಗಿದ್ದಾರೆ. ಆದ್ದರಿಂದ ಅವರನ್ನು ಕರ್ನಾಟಕದ ಸಾಮಾಜಿಕ ಆಂದೋಲನಕ್ಕೆ ಸೀಮಿತಗೊಳಿಸಬಾರದು. ಹಾಗೆಯೇ ಕಾಯಕ ತತ್ವವು ಜಗತ್ತಿನ ಶ್ರೇಷ್ಠ ತತ್ವವೆಂಬುದನ್ನು ಎಲ್ಲರಿಗೂ ಮನಗಾಣಿಸಬೇಕಾಗಿದೆ.

ಗ್ರಂಥ ಋಣ :

1. ಚಿದಾನಂದ ಮೂರ್ತಿ ಎಂ. ; ವಚನ ಸಾಹಿತ್ಯ ; ಸಾಮಾನ್ಯನಿಗೆ ಸಾಹಿತ್ಯ ಚರಿತ್ರೆ ಸಂಪುಟ–5 ; ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು ; ಮುದ್ರಣ ವರ್ಷ : 2008 (ತೃತೀಯ ಮುದ್ರಣ)
2. ತ.ಸು. ಶಾಮರಾಯ ; ಶಿವಶರಣರ ಕಥಾರತ್ನಕೋಶ ; ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ, ಮೈಸೂರು ; ಮುದ್ರಣ ವರ್ಷ : 2008 (ಹತ್ತನೆಯ ಪರಿಷ್ಕೃತ ಮುದ್ರಣ)
3. ತಿಪ್ಪೇರುದ್ರಸ್ವಾಮಿ ಎಚ್. ; ವಚನಗಳಲ್ಲಿ ವೀರಶೈವ ಧರ್ಮ ; ಡಿವಿಕೆ ಮೂರ್ತಿ ಪ್ರಕಾಶನ, ಮೈಸೂರು ; ಮುದ್ರಣ ವರ್ಷ : 1993
4. ಬಸವರಾಜು ಎಲ್ (ಸಂಪಾದಕರು) ; ಬಸವಣ್ಣನವರ ವಚನಗಳು (ಬಸವೇಶ್ವರ ವಚನ ಸಂಗ್ರಹ) ; ಸಪ್ನ ಬುಕ್ ಹೌಸ್, ಬೆಂಗಳೂರು ; ಮುದ್ರಣ ವರ್ಷ : ಏಪ್ರಿಲ್ 2016 (ಹನ್ನೆರಡನೇ ಮುದ್ರಣ)